<u>ಕರ್ನಾಟಕ ವಿಧಾನ ಪರಿಷತ್ತು</u>

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 918 (1061) |
| ಉತ್ತರಿಸುವ ದಿನಾಂಕ | 22-12-2021 |
| ಮಾನ್ಯ ಸದಸ್ಯರ ಹೆಸರು | ಶ್ರೀ ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸುವ ಸಚಿವರು | ಕಂದಾಯ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಸುಲಭ ನೋಂದಣಿ Anywhere registration ಸೇವೆಯು ಭೂಗಳ್ಳರಿಗೆ ವರದಾನವಾಗಿ ನಕಲಿ ದಾಖಲೆ ಸೃಷ್ಟಿಸಿ ಆಸ್ತಿ ಮಾರಾಟ ಮಾಡುತ್ತಾ ಅಕ್ರಮವೆಸಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬೆಂಗಳೂರು ನಗರ ಜಿಲ್ಲೆಯಲ್ಲಿ 5 ನೋಂದಣಿ ಜಿಲ್ಲೆಗಳಿದ್ದು, ಆಯಾ ಜಿಲ್ಲಾನೋಂದಣಿ ಕಛೇರಿ ವ್ಯಾಪ್ತಿಯಲ್ಲಿನ ಉಪನೋಂದಣಿ ಕಛೇರಿಗಳಲ್ಲಿ ಸದರಿ ಜಿಲ್ಲೆ ವ್ಯಾಪ್ತಿಯ ಸ್ವತ್ತುಗಳನ್ನು ಸದರಿ ಜಿಲ್ಲೆಯಲ್ಲಿನ ಯಾವುದೇ ಉಪನೋಂದಣಿ ಕಛೇರಿಗಳಲ್ಲಿ ನೋಂದಾಯಿಸುವ ಪದ್ಧತಿಯನ್ನು ಜಾರಿಗೆ ತರಲಾಗಿದ್ದು, ಈ Anywhere registration ಪದ್ಧತಿಯಿಂದ ಭೂಗಳ್ಳರು ನಕಲಿ ದಾಖಲೆ ಸೃಷ್ಟಿಸಿ ಆಸ್ತಿ ಮಾರಾಟ ಮಾಡುತ್ತಾ, ಅಕ್ರಮವೆಸಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿರುವುದಿಲ್ಲ. |
| ಆ | ಹಾಗಿದ್ದಲ್ಲಿ, ಅಕ್ರಮ ಆಸ್ತಿ ನೋಂದಣಿಗೆ ಮತ್ತು ಭೂಗಳ್ಳರಿಗೆ ಕಡಿವಾಣ ಹಾಕಲು ಸರ್ಕಾರ ತೆಗೆದುಕೊಂಡ ಕಠಿಣ ಕ್ರಮಗಳೇನು; | ಸರ್ಕಾರದ ಸುತ್ತೋಲೆ ಸಂಖ್ಯೆ: ಕಂಇ 344 ಮುನೋಮು 2008, ದಿನಾಂಕ: 06-04-2009 ಹಾಗೂ ಸದರಿ ಸುತ್ತೋಲೆಗೆ ನೀಡಲಾದ ತಿದ್ದುಪಡಿ ಸುತ್ತೋಲೆಗಳನ್ವಯ ಸ್ವತ್ತುಗಳ ನೋಂದಣಿಗೆ ಸಂಬಂಧಿಸಿದ ದಸ್ತಾವೇಜುಗಳನ್ನು ನೋಂದಾಯಿಸುವ ಸಮಯದಲ್ಲಿ ಹಾಜರುಪಡಿಸಬೇಕಾದ ದಾಖಲೆಗಳನ್ನು ನಿಗಧಿಪಡಿಸಲಾಗಿದ್ದು, ಸದರಿ ದಾಖಲೆಗಳನ್ನು ಪಡೆದು, ಉಪ ನೋಂದಣಾಧಿಕಾರಿಗಳು ದಸ್ತಾವೇಜುಗಳನ್ನು ನೋಂದಾಯಿಸುತ್ತಿರುತ್ತಾರೆ.<br><br>ಅಲ್ಲದೇ, ಸರ್ಕಾರದ ಸುತ್ತೋಲೆ ಸಂಖ್ಯೆ: ಕಂಇ 6 ಮುನೋಮು 2013 ದಿನಾಂಕ:18-07-2014ರನ್ವಯ ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಕಾವೇರಿ ತಂತ್ರಾಂಶವನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ "ಇ-ಸ್ವತ್ತು" ತಂತ್ರಾಂಶದೊಂದಿಗೆ ಸಂಯೋಜಿಸಲಾಗಿದ್ದು, ಇದರಿಂದ ಗ್ರಾಮಪಂಚಾಯಿತಿ ವ್ಯಾಪ್ತಿ ಸ್ವತ್ತುಗಳ ನೋಂದಣಿ ಸಮಯದಲ್ಲಿ ಗ್ರಾಮಪಂಚಾಯಿತಿ ವ್ಯಾಪ್ತಿಯ ಸ್ವತ್ತುಗಳಿಗೆ ಇರುವ ಇ-ಸ್ವತ್ತು ತಂತ್ರಾಂಶದಿಂದ ಸ್ವತ್ತಿನ ಮಾಹಿತಿಯನ್ನು ಪಡೆದು, ದಸ್ತಾವೇಜುಗಳನ್ನು ನೋಂದಾಯಿಸಲಾಗುತ್ತಿದೆ.<br><br>ಜಮೀನಿನ ಸರ್ವೆ ನಕ್ಷೆ-ನಮೂನೆ-11ಇ ಇರುವ "ಮೋಜಿಣಿ" ತಂತ್ರಾಂಶವನ್ನು ಸರ್ಕಾರದ ಸುತ್ತೋಲೆ ಸಂಖ್ಯೆ: ಕಂಇ 47 ಮುನೋಮು 2016, ದಿನಾಂಕ: 05-10-2016 ರನ್ವಯ |

| ಕ್ರ. ಸಂ. | ಪ್ರಶ್ನೆ | ಉತ್ತರ |
| --- | --- | --- |
| | | ಇಲಾಖೆಯ ಕಾವೇರಿ ತಂತ್ರಾಂಶದೊಂದಿಗೆ ಸಂಯೋಜಿಸಲಾಗಿದ್ದು, ಇದರಿಂದ ಜಮೀನಿನ 11-ಇ ಸರ್ವೆ ನಕ್ಷೆಯನ್ನು ಮೋಜಿಣಿ ತಂತ್ರಾಂಶದ ಮೂಲಕ ಪಡೆದು ನೋಂದಾಯಿಸಲಾಗುತ್ತಿದೆ.<br><br>ಕೃಷಿ ಜಮೀನುಗಳ ನೋಂದಣಿಗೆ ಸಂಬಂಧಿಸಿದ ದಸ್ತಾವೇಜುಗಳನ್ನು ನೋಂದಾಯಿಸುವಾಗ ಭೂಮಿ ತಂತ್ರಾಂಶದಿಂದ ಕೃಷಿ ಜಮೀನಿನ ಮಾಹಿತಿಯನ್ನು ಪಡೆದು ನೋಂದಾಯಿಸಲಾಗುತ್ತಿದೆ.<br><br>ನಗರಾಭಿವೃದ್ಧಿ ಇಲಾಖೆಯ ಇ-ಆಸ್ತಿ ತಂತ್ರಾಂಶವನ್ನು ಇಲಾಖೆಯ ಕಾವೇರಿ ತಂತ್ರಾಂಶದೊಂದಿಗೆ ಪ್ರಾಯೋಗಿಕವಾಗಿ ರಾಮನಗರ ಮತ್ತು ಕನಕಪುರ ನಗರ ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಯಲ್ಲಿ ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 40 ಮುನೋಮು 2017 (ಭಾಗ-1) ದಿನಾಂಕ:29-01-2020 ರನ್ವಯ ಸಂಯೋಜಿಸಲಾಗಿದ್ದು, ಸದರಿ ಸ್ವತ್ತುಗಳ ಮಾಹಿತಿಯನ್ನು ಇ-ಆಸ್ತಿ ತಂತ್ರಾಂಶದ ಮೂಲಕ ಪಡೆದು ನೋಂದಾಯಿಸಲಾಗುತ್ತಿದೆ.<br><br>ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯು ಅಭಿವೃದ್ಧಿ ಪಡಿಸಿರುವ ಇ-ಆಸ್ತಿ ತಂತ್ರಾಂಶವನ್ನು ಇಲಾಖೆಯ ಕಾವೇರಿ ತಂತ್ರಾಂಶದೊಂದಿಗೆ ಪ್ರಾಯೋಗಿಕವಾಗಿ ಶಾಂತಿನಗರ ಉಪವಿಭಾಗ ವ್ಯಾಪ್ತಿಯಲ್ಲಿ ಬರುವ 3 ವಾರ್ಡ್‌ಗಳಿಗೆ ಸಂಯೋಜಿಸಲಾಗಿದ್ದು, ಇ-ಆಸ್ತಿ ತಂತ್ರಾಂಶದ ನಮೂನೆ-ಎ ಮತ್ತು ನಮೂನೆ-ಬಿ ದಾಖಲೆಗಳನ್ನು ಪಡೆದು ನೋಂದಾಯಿಸಲು ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 39 ಮುನೋಮು 2018, ದಿನಾಂಕ:21-01-2021 ರನ್ವಯ ಜಾರಿಗೆ ತರಲಾಗಿದೆ.<br><br>ಈ ಮೇಲಿನ ಎಲ್ಲಾ ಕ್ರಮಗಳಿಂದ ಅಕ್ರಮ ಆಸ್ತಿ ನೋಂದಣಿಗೆ ಮತ್ತು ಭೂಗಳ್ಳರಿಗೆ ಕಡಿವಾಣ ಹಾಕಲು ಕ್ರಮಗಳನ್ನು ಕೈಗೊಳ್ಳಲಾಗಿದೆ. |
| ಇ | ನೋಂದಣಿ ಇಲಾಖೆಯಲ್ಲಿ ನೋಂದಣಿ ಮಾಡಿಸುವಾಗ ಆಸ್ತಿ ಮತ್ತು ಭೂಮಿ ಪರಭಾರೆ ಪತ್ರಗಳ ಪರಿಶೀಲನೆ ಮಾಡಲಾಗುವುದೇ; ಹಾಗಿದ್ದಲ್ಲಿ, ಅಕ್ರಮ ನಡೆಯುತ್ತಿರುವುದಕ್ಕೆ ಕಾರಣವೇನು; | ಸರ್ಕಾರದ ಸುತ್ತೋಲೆ ಸಂಖ್ಯೆ: ಕಂಇ 344 ಮುನೋಮು 2008, ದಿನಾಂಕ:06-04-2009 ಹಾಗೂ ಸದರಿ ಸುತ್ತೋಲೆಗೆ ನೀಡಲಾದ ತಿದ್ದುಪಡಿ ಸುತ್ತೋಲೆಗಳನ್ವಯ ಸ್ವತ್ತುಗಳ ನೋಂದಣಿಗೆ ಸಂಬಂಧಿಸಿದ ದಸ್ತಾವೇಜುಗಳನ್ನು ನೋಂದಾಯಿಸುವ ಸಮಯದಲ್ಲಿ ಹಾಜರುಪಡಿಸಬೇಕಾದ ದಾಖಲೆಗಳನ್ನು ನಿಗಧಿಪಡಿಸಲಾಗಿದ್ದು, ಸದರಿ ದಾಖಲೆಗಳನ್ನು ಪಡೆದು ಉಪನೋಂದಣಾಧಿಕಾರಿಗಳು ದಸ್ತಾವೇಜುಗಳನ್ನು ನೋಂದಾಯಿಸುತ್ತಿರುತ್ತಾರೆ. |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| | | ಅಲ್ಲದೇ, ಸರ್ಕಾರದ ದಿನಾಂಕ: 18–07–2014ರ ಸುತ್ತೋಲೆ ಸಂಖ್ಯೆ:ಕಂಇ 6 ಮುನೋಮು 2013 ರನ್ವಯ ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಕಾವೇರಿ ತಂತ್ರಾಂಶವನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ "ಇ–ಸ್ವತ್ತು" ತಂತ್ರಾಂಶದೊಂದಿಗೆ ಸಂಯೋಜಿಸಲಾಗಿದ್ದು, ಇದರಿಂದ ಗ್ರಾಮಪಂಚಾಯಿತಿ ವ್ಯಾಪ್ತಿ ಸ್ವತ್ತುಗಳ ನೋಂದಣಿ ಸಮಯದಲ್ಲಿ ಗ್ರಾಮಪಂಚಾಯಿತಿ ವ್ಯಾಪ್ತಿಯ ಸ್ವತ್ತುಗಳಿಗೆ ಇರುವ ಇ–ಸ್ವತ್ತು ತಂತ್ರಾಂಶದಿಂದ ಸ್ವತ್ತಿನ ಮಾಹಿತಿಯನ್ನು ಪಡೆದು ದಸ್ತಾವೇಜುಗಳನ್ನು ನೋಂದಾಯಿಸಲಾಗುತ್ತಿದೆ.<br><br>ಆದಾಗ್ಯೂ, ಅಕ್ರಮಗಳು ನಡೆದಲ್ಲಿ ಸಂಬಂಧಪಟ್ಟ ಪಕ್ಷಕಾರರ ವಿರುದ್ಧ ನೋಂದಣಿ ಕಾಯ್ದೆ 1908ರ ಕಲಂ 82 ರಲ್ಲಿನ ಅಪರಾಧಗಳಿಗೆ ಸಂಬಂಧಿಸಿದಂತೆ ಕಲಂ 83 ರನ್ವಯ ಸಂಬಂಧಪಟ್ಟ ಪೊಲೀಸ್ ಠಾಣೆಯಲ್ಲಿ ದೂರನ್ನು ದಾಖಲಿಸಲು ಕ್ರಮ ಕೈಗೊಳ್ಳಲಾಗುತ್ತಿದೆ. |
| ಈ | ನಕಲಿ ದಾಖಲೆ ಸೃಷ್ಟಿಸಿ ಅಕ್ರಮವೆಸಗುವ ಆರೋಪಿಗಳ ವಿರುದ್ಧ ಮತ್ತು ಇದಕ್ಕೆ ಸಹಕರಿಸಿದ ನೌಕರರ ವಿರುದ್ಧ ಸರ್ಕಾರ ತೆಗೆದುಕೊಂಡ ಕ್ರಮಗಳೇನು; | ದಸ್ತಾವೇಜುಗಳ ನೋಂದಣಿ ವೇಳೆ ನೋಂದಣಿ ಕಾಯ್ದೆ 1908ರ ಕಲಂ 82 ರಲ್ಲಿ ಉಲ್ಲೇಖಿಸಿದ ಅಪರಾಧಗಳಾದ ಸುಳ್ಳು ಹೇಳಿಕೆಗಳನ್ನು ಕೊಟ್ಟಿದ್ದಕ್ಕಾಗಿ (False Statement) ಅಥವಾ ಭಾಷಾಂತರಗಳನ್ನು ವಶಾವಣೆ ಮಾಡಿದ್ದಕ್ಕಾಗಿ (Delivering False copies or Translations), ಮರಷಾಂತರ ಮಾಡಿದ್ದಕ್ಕಾಗಿ (False personation) ಮತ್ತು ದುಷ್ಪ್ರೇರಣೆ (Abetment) ಒಳಗೊಂಡಿರುವ ಪ್ರಕರಣಗಳು ಕಂಡು ಬಂದಲ್ಲಿ ಸದರಿ ಕಾಯ್ದೆಯ ಕಲಂ 83ರನ್ವಯ ಸಂಬಂಧಪಟ್ಟವರ ವಿರುದ್ಧ ಕ್ರಿಮಿನಲ್ ಮೊಕದ್ದಮೆಯನ್ನು ಹೂಡಲಾಗುತ್ತಿದೆ ಹಾಗೂ ಇಂತಹ ಕೃತ್ಯಗಳಿಗೆ ನೌಕರರು ಸಹಕರಿಸಿರುವುದು ಕಂಡುಬಂದಲ್ಲಿ, ಅಂತಹ ನೌಕರರ ವಿರುದ್ಧ ಶಿಸ್ತು ಕ್ರಮಗಳನ್ನು ಕೈಗೊಳ್ಳಲಾಗುವುದು. |
| ಉ | ನೋಂದಣಿ ಇಲಾಖೆಯಲ್ಲಿ ಸಮಗ್ರ ಬದಲಾವಣೆ ತರುವ ನಿಟ್ಟಿನಲ್ಲಿ ಸುಧಾರತ ಆಧುನಿಕ ತಂತ್ರಜ್ಞಾನ ಬಳಸಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು? (ವಿವರ ನೀಡುವುದು) | ನೋಂದಣಿ ಮತ್ತು ಮುದ್ರಾಂಕ ಇಲಾಖೆಯಲ್ಲಿ ಸಮಗ್ರ ಬದಲಾವಣೆ ತರುವ ನಿಟ್ಟಿನಲ್ಲಿ ಸುಧಾರಿತ ಆಧುನಿಕ ತಂತ್ರಜ್ಞಾನ ಬಳಸಲು ಈ ಕೆಳಗೆ ತಿಳಿಸಿರುವ ಕ್ರಮಗಳನ್ನು ಕೈಗೊಳ್ಳಲಾಗಿದೆ.<br><br>1. ಸೆಂಟರ್ ಫಾರ್ ಸ್ಮಾರ್ಟ್‌ಗೌವನ್ನೆನ್ಸ್ ಸಹಯೋಗದೊಂದಿಗೆ ಕಾವೇರಿ–2.0 ತಂತ್ರಾಂಶವನ್ನು ಅಭಿವೃದ್ಧಿಪಡಿಸಲಾಗುತ್ತಿದೆ.<br><br>2. ಸಾರ್ವಜನಿಕರಿಗೆ ಆನ್‌ಲೈನ್ ಮುಖಾಂತರ ಸೇವೆಗಳನ್ನು ಕಾವೇರಿ ಆನ್‌ಲೈನ್ ಸರ್ವೀಸಸ್ ಅನುಷ್ಠಾನಗೊಳಿಸಲಾಗಿರುತ್ತದೆ. ಇದರ ಮುಖಾಂತರ |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| | | ಸಾರ್ವಜನಿಕರು ಆನ್‌ಲೈನ್ ಮೂಲಕ ಋಣಭಾರ ಪ್ರಮಾಣಪತ್ರ (ಇ.ಸಿ) ಹಾಗೂ ದಸ್ತಾವೇಜುಗಳ ದೃಢೀಕೃತ ನಕಲು ಪ್ರತಿ (ಸಿ.ಸಿ)ನ್ನು ಪಡೆಯಬಹುದಾಗಿದೆ. ಹಾಗೂ ಸದರಿ ಪೋರ್ಟಲ್‌ನಲ್ಲಿ ಮುದ್ರಾಂಕ ಹಾಗೂ ನೋಂದಣಿ ಶುಲ್ಕಗಳ ವಿವರ ಮತ್ತು ಸ್ವತ್ತಿನ ಮಾರ್ಗಸೂಚಿ ದರದ ಮಾಹಿತಿ ಪಡೆಯಬಹುದಾಗಿರುತ್ತದೆ.<br><br>3. ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಕಾವೇರಿ ತಂತ್ರಾಂಶವನ್ನು ಈ ಕೆಳಗೆ ತಿಳಿಸಿರುವ ಇಲಾಖೆಗಳ ತಂತ್ರಾಂಶಗಳೊಂದಿಗೆ ಸಂಯೋಜಿಸಲಾಗಿರುತ್ತದೆ. |

| ಕ್ರ. ಸಂ | ಇಲಾಖೆಯ ಹೆಸರು | ತಂತ್ರಾಂಶದ ಹೆಸರು | ಷರಾ |
|---|---|---|---|
| 1 | ಕಂದಾಯ ಇಲಾಖೆ | ಭೂಮಿ | ರಾಜ್ಯಾದ್ಯಂತ ಅಳವಡಿಸಿದೆ. |
| 2 | ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ | ಮೋಜಿಣಿ | ರಾಜ್ಯಾದ್ಯಂತ ಅಳವಡಿಸಿದೆ. |
| 3 | ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ | ಇ–ಸ್ವತ್ತು | ರಾಜ್ಯಾದ್ಯಂತ ಅಳವಡಿಸಿದೆ. |
| 4 | ನಗರಾಭಿವೃದ್ಧಿ ಇಲಾಖೆ | ಇ–ಆಸ್ತಿ | ರಾಮನಗರ & ಕನಕಪುರ ಉಪ ನೋಂದಣಿ ಕಛೇರಿಗಳಲ್ಲಿ ಮತ್ತು ಬಿಬಿಎಂಪಿ ವ್ಯಾಪ್ತಿಯ ಕೆಲವು ವಾರ್ಡ್‌ಗಳಲ್ಲಿ ಸಂಯೋಜಿಸಲಾಗಿದೆ |
| 5 | ನಗರಾಭಿವೃದ್ಧಿ ಇಲಾಖೆ | ಯು.ಪಿ.ಓ. ಆರ್ | ಮಂಗಳೂರು & ಶಿವಮೊಗ್ಗ ಉಪ ನೋಂದಣಿ ಕಛೇರಿಗಳಲ್ಲಿ (ಐಚ್ಛಿಕವಾಗಿ) |
| 6 | ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ | ಸಕಾಲ | ರಾಜ್ಯಾದ್ಯಂತ ಅಳವಡಿಸಿದೆ. |
| 7 | ಇ–ಆಡಳಿತ ಇಲಾಖೆ | 'FRUITS' | ರಾಜ್ಯಾದ್ಯಂತ ಅಳವಡಿಸಿದೆ. |

. . . 5

<table>
<tr><th>ಕ್ರ. ಸಂ.</th><th>ಪ್ರಶ್ನೆ</th><th>ಉತ್ತರ</th></tr>
<tr><td></td><td></td><td>
<table>
<tr><td>8</td><td>ವಿದ್ಯುನ್ಮಾನ ನಾಗರೀಕ ಸೇವಾ ವಿತರಣಾ ನಿರ್ದೇಶನಾಲಯ (ಇ.ಡಿ.ಸಿಎಸ್)</td><td>ಓ.ಟಿ.ಪಿ ಸೇವೆಗಳು</td><td>ಕಾವೇರಿ ಆನ್ ಲೈನ್ ಸೇವೆಗಳಲ್ಲಿ ಸಂಯೋಜಿಸಲಾಗಿದೆ.</td></tr>
<tr><td>9</td><td>ಆರ್ಥಿಕ ಇಲಾಖೆ</td><td>ಖಜಾನೆ–2</td><td>ಕಾವೇರಿ ಆನ್ ಲೈನ್ ಸೇವೆಗಳು ಮತ್ತು ಕಾವೇರಿ ಆನ್ ಲೈನ್ ಫಾರ್ಮ್ ರಿಜಿಸ್ಟ್ರೇಶನ್‌ನಲ್ಲಿ ಸಂಯೋಜಿಸಲಾಗಿದೆ.</td></tr>
<tr><td>10</td><td>ಇ–ಆಡಳಿತ ಇಲಾಖೆ</td><td>e-Sign</td><td>ಕಾವೇರಿ ಆನ್ ಲೈನ್ ಸೇವೆಗಳಲ್ಲಿ ಸಂಯೋಜಿಸಲಾಗಿದೆ.</td></tr>
<tr><td>11</td><td>ಇ–ಆಡಳಿತ ಇಲಾಖೆ</td><td>Digi Locker</td><td>ಕಾವೇರಿ ಆನ್ ಲೈನ್ ಸೇವೆಗಳಲ್ಲಿ ಸಂಯೋಜಿಸಲಾಗಿದೆ.</td></tr>
</table>
4. ಕೃಷಿ ಸಾಲಗಳಿಗೆ ಸಂಬಂಧಿಸಿದ ಘೋಷಣಾ ಪತ್ರಗಳು (Declaration/4) ಕೃಷಿ ಸಾಲಗಳಿಗೆ ಸಂಬಂಧಿಸಿದ ಘೋಷಣಾ ಪತ್ರಗಳು (Declaration/Form-3), ಸಾಲ ತೀರುವಳಿ ಪತ್ರ ಹಾಗೂ ಅಡಮಾನ ಪತ್ರಗಳನ್ನು ಕಾವೇರಿ ತಂತ್ರಾಂಶದಲ್ಲಿ ಆನ್‌ಲೈನ್ ಮುಖಾಂತರ ಫೈಲಿಂಗ್ ಮಾಡಲು ಅವಕಾಶವಾಗುವಂತೆ ಇ–ಆಡಳಿತ ಇಲಾಖೆಯ 'FRUITS' ತಂತ್ರಾಂಶದೊಂದಿಗೆ ಕಾವೇರಿ ತಂತ್ರಾಂಶವನ್ನು ಸಂಯೋಜಿಸಲಾಗಿರುತ್ತದೆ.
5. 'Block Chain' ಆಧಾರಿತ ದಸ್ತಾವೇಜುಗಳ ನೋಂದಣಿಯನ್ನು ಇ–ಆಡಳಿತ ಇಲಾಖೆಯ ಸಹಯೋಗದೊಂದಿಗೆ ಗುಬ್ಬಿ ಮತ್ತು ಜಗಳೂರು ಉಪನೋಂದಣಿ ಕಛೇರಿಗಳಲ್ಲಿ ಪೈಲಟ್ ಆಧಾರದ ಮೇಲೆ ಅನುಷ್ಠಾನಗೊಳಿಸಲಾಗಿರುತ್ತದೆ. ಸದರಿ ತಂತ್ರಜ್ಞಾನವನ್ನು ಹೆಚ್ಚುವರಿಯಾಗಿ 04 ಉಪನೋಂದಣಿ ಕಛೇರಿಗಳಿಗೆ ಪೈಲಟ್ ಆಧಾರದ ಮೇಲೆ ವಿಸ್ತರಿಸಲು ಕ್ರಮಕೈಗೊಳ್ಳಲಾಗಿದೆ.
6. ನೋಂದಣಿ ಮತ್ತು ಮುದ್ರಾಂಕ ಇಲಾಖೆಯು "ಸುರಭಿ" ಯೋಜನೆಯಡಿ ಪಾರಂಪರಿಕ ಕಾನೂನಾತ್ಮಕ ದಾಖಲೆಗಳನ್ನು ಹಂತ ಹಂತವಾಗಿ ಸ್ಕ್ಯಾನಿಂಗ್ ಮತ್ತು ಡಿಜಟಲೀಕರಣ ಮಾಡಿ ಸಂರಕ್ಷಿಸಿಡಲು ಉದ್ದೇಶಿಸಿದ್ದು, ಹಾಲಿ ಪೈಲಟ್ ಆಧಾರದ ಮೇಲೆ ಸದರಿ ಯೋಜನೆಯನ್ನು ಗಾಂಧಿನಗರ ಉಪ ನೋಂದಣಿ ಕಛೇರಿಯಲ್ಲಿ ಕೈಗೊಳ್ಳಲಾಗಿರುತ್ತದೆ.
</td></tr>
</table>

. . . 6

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| | | 7. ಇಲಾಖೆಯ ಎಲ್ಲಾ ಅಧಿಕಾರಿ/ಸಿಬ್ಬಂದಿಗಳಿಗೆ ಡಿಜಿಟಲ್ ಸಿಗ್ನೇಚರ್ ಸರ್ಟಿಫಿಕೇಟ್‌ಗಳನ್ನು (DSC) ನೀಡಲು ಕ್ರಮವಹಿಸಲಾಗಿದೆ.<br><br>8. ಎಲ್ಲಾ ಉಪ ನೋಂದಣಿ ಕಛೇರಿಗಳಿಗೆ ಹೊಸ ಯು.ಪಿ.ಎಸ್ ಹಾಗೂ ಬ್ಯಾಟರಿಗಳನ್ನು ಅಳವಡಿಸಲಾಗಿರುತ್ತದೆ.<br><br>9. ಉಪ ನೋಂದಣಿ ಕಛೇರಿಗಳಲ್ಲಿ ಹಾಲಿ ಇರುವ ಹಾರ್ಡ್‌ವೇರ್‌ಗಳು 2013ರಲ್ಲಿ ಖರೀದಿಸಲಾಗಿದ್ದು, ಇವುಗಳ ಕಾರ್ಯಾವಧಿ ಮುಗಿದಿರುವುದರಿಂದ ಹೊಸ ಹಾರ್ಡ್‌ವೇರ್‌ಗಳ ಸರಬರಾಜು ಹಾಗೂ ನಿರ್ವಹಣೆಗೆ ಸೇವಾ ಪೂರೈಕೆದಾರರನ್ನು BOO ಮಾದರಿಯಲ್ಲಿ ಆಯ್ಕೆ ಮಾಡಲು ನಿರ್ಧರಿಸಲಾಗಿದ್ದು, ಅದರಂತೆ ಆರ್.ಎಫ್.ಪಿ.ಯನ್ನು ಸಿದ್ಧಪಡಿಸಲಾಗಿದ್ದು, ಅನುಮೋದನೆ ನೀಡಲು ಪರಿಶೀಲಿಸಲಾಗುತ್ತಿದೆ.<br><br>10. ಕಾವೇರಿ ತಂತ್ರಾಂಶಕ್ಕೆ ಸಂಬಂಧಿಸಿದಂತೆ ಹಾಗೂ ಇಲಾಖೆಯಲ್ಲಿನ ಹಾರ್ಡ್‌ವೇರ್ ಮತ್ತು ಇತರೆ ಗಣಕೀಕರಣದ ವಿಷಯಗಳಿಗೆ ಸಂಬಂಧಿಸಿದಂತೆ ಅಗತ್ಯ ಮಾರ್ಗದರ್ಶನವನ್ನು ನೀಡಲು ಕಾವೇರಿ ಯೋಜನಾ ಉಸ್ತುವಾರಿ ಘಟಕಕ್ಕೆ ಹೊರಗುತ್ತಿಗೆ ಆಧಾರದ ಮೇಲೆ ತಾಂತ್ರಿಕ ಸದಸ್ಯರನ್ನು ಮೆ:ಕೆಪಿಎಂಜಿ ಅಡ್ವೇಜರಿ ಸರ್ವೀಸಸ್ ಪ್ರೈ.ಲಿ ಸಂಸ್ಥೆಯಿಂದ ನೇಮಕ ಮಾಡಿಕೊಳ್ಳಲಾಗಿದೆ.<br><br>11. ಇಲಾಖೆಯ ಅಧಿಕಾರಿ/ ಸಿಬ್ಬಂದಿಗಳಿಗೆ ಹಾರ್ಡ್‌ವೇರ್ ಇಂಜಿನಿಯರ್‌ಗಳಿಗೆ ಮತ್ತು ಡೇಟಾ ಎಂಟ್ರಿ ಆಪರೇಟರ್‌ಗಳಿಗೆ ಕಾವೇರಿ ತಂತ್ರಾಂಶ ಹಾಗೂ ಗಣಕೀಕರಣಕ್ಕೆ ಸಂಬಂಧಿಸಿದ ವಿಷಯಗಳಿಗೆ ತರಬೇತಿ ನೀಡಲು ಗಣಕಯಂತ್ರ ತರಬೇತಿ ಕೋಶವನ್ನು ಪ್ರಾರಂಭಿಸಲಾಗಿರುತ್ತದೆ. ಸದರಿ ತರಬೇತಿ ಕೋಶದಲ್ಲಿ ಇಲ್ಲಿಯವರೆಗೆ ಜಿಲ್ಲಾ ನೋಂದಣಾಧಿಕಾರಿಗಳಿಗೆ 02 ಬ್ಯಾಚ್‌ಗಳಲ್ಲಿ, ಹಾರ್ಡ್‌ವೇರ್ ಇಂಜಿನಿಯರ್‌ಗಳಿಗೆ 03 ಬ್ಯಾಚ್‌ಗಳಲ್ಲಿ, ದ್ವಿತೀಯ ದರ್ಜೆ ಸಹಾಯಕರಿಗೆ 02 ಬ್ಯಾಚ್‌ಗಳಲ್ಲಿ, ಗಣಕಯಂತ್ರ ನಿರ್ವಾಹಕರಿಗೆ 07 ಬ್ಯಾಚ್‌ಗಳಲ್ಲಿ ಹಾಗೂ ಪ್ರಥಮ ದರ್ಜೆ ಸಹಾಯಕರುಗಳಿಗೆ 06 ಬ್ಯಾಚ್‌ಗಳಲ್ಲಿ ತರಬೇತಿ ನೀಡಲಾಗಿದೆ. |

ಸಂಖ್ಯೆ: ಕಂಇ/589/ಎಂಎನ್‌ಎಸ್‌ಎ/2021

(ಆರ್.ಅಶೋಕ)
ಕಂದಾಯ ಸಚಿವರು